# ಮಕ್ಕಳೊಂದಿಗೆ ನಂಬಿಕೆಯ ಸಂಬಂಧವನ್ನು ರೂಪಿಸುವುದು

ವಿನೀತಾ ರೋಚಾ

ನಾವು ಬದುಕುವ ಈ ಪ್ರಪಂಚದಲ್ಲಿ ಅಷ್ಟು ಸುಲಭದಲ್ಲಿ ನಂಬಿಕೆ ಉಂಟಾಗುವುದಿಲ್ಲ. ನನ್ನ ಅಭಿಪ್ರಾಯದಲ್ಲಿ, ಮಗುವಿನ ಶಾಲಾ ದಿನಗಳಲ್ಲಿ ಅಭಿವೃದ್ಧಿಪಡಿಸಬೇಕಾದ ಅನೇಕ ಆಯಾಮಗಳ ಪೈಕಿ ಸಾಮಾಜಿಕ – ಭಾವನಾತ್ಮಕ ಕೌಶಲ್ಯವಾಗಿ ನಂಬಿಕೆಯನ್ನು ರೂಪಿಸುವುದು ಸಹ ಪ್ರಮುಖ ಅಂಶವೆನಿಸುತ್ತದೆ. ನಂಬಿಕೆ ಎನ್ನುವುದು ಮಾನವನ ಪ್ರಾಮಾಣಿಕತೆಯಲ್ಲಿ ಇರುವ ಆತ್ಮವಿಶ್ವಾಸವಾಗಿರುತ್ತದೆ. ಇತರರು ಸಾಮಾನ್ಯವಾಗಿ ಒಳ್ಳೆಯ ಉದ್ದೇಶಗಳನ್ನು ಹೊಂದಿರುತ್ತಾರೆ ಎಂದು ಇದು ಭಾವಿಸುತ್ತದೆ. ಆದರೆ ಅವರು ಜೀವಿಸುವ ಸನ್ನಿವೇಶಗಳು ಅವರು ನಿರಂತರವಾಗಿ ಭೀತಿ ಮತ್ತು ಅಪನಂಬಿಕೆಯ ವಾತಾವರಣದಲ್ಲಿ ಕಾರ್ಯ ನಿರ್ವಹಿಸುವಂತೆ ಮಾಡುತ್ತದೆ. ಕೆಲವೊಮ್ಮೆ, ಮೂಲ ಸೌಕರ್ಯಗಳ ಕೊರತೆಯು, ಸ್ವಯಂ ಅಥವಾ ಸುತ್ತಮುತ್ತಲಿನ ಪರಿಸರದ ಕುರಿತು ಗೌರವ ಇಲ್ಲದಿರುವುದು ಅಥವಾ ಕಳ್ಳತನದಂತಹ ದುರ್ವರ್ತನೆ ಇತ್ಯಾದಿ ಋಣಾತ್ಮಕ ವರ್ತನೆಗಳನ್ನು ಮಕ್ಕಳಲ್ಲಿ ಉಂಟು ಮಾಡುತ್ತದೆ. ಶಾಲೆಗಳಲ್ಲಿ ಮಕ್ಕಳಿಗೆ ಮೌಲ್ಯಗಳನ್ನು ಕಲಿಸುವ ಕೆಲಸವು, ಬೆಳವಣಿಗೆಯ ಇತರ ಕಾರ್ಯಗಳೊಂದಿಗೆ ಸಾಗಬೇಕು. ಅಲ್ಲದೆ ಈ ಕುರಿತು ನಿರಂತರ ಮತ್ತು ಸ್ಥಿರ ಪ್ರಯತ್ನಗಳು ನಡೆಯಬೇಕು. ನಮ್ಮ ಮಕ್ಕಳು ಶೈಕ್ಷಣಿಕ ಉತ್ಕೃಷ್ಟತೆಯನ್ನು ಸಾಧಿಸುವಾಗಲೂ, ಮೌಲ್ಯಗಳು ಮತ್ತು ನಂಬಿಕೆಯಂತಹ ಸಾಮಾಜಿಕ – ಭಾವನಾತ್ಮಕ ಕೌಶಲ್ಯಗಳನ್ನು ಮಕ್ಕಳು ಮೈಗೂಡಿಸಿಕೊಳ್ಳಲು ನಾವು ಹೇಗೆ ಸಹಾಯ ಮಾಡಬಹುದು ಎಂಬುದನ್ನು ನಮ್ಮನ್ನು ನಾವೇ ಕೇಳಿಕೊಳ್ಳಬೇಕು. ಆದರೂ, ಸಾಮಾಜಿಕ – ಭಾವನಾತ್ಮಕ ಕೌಶಲ್ಯವಾಗಿ ನಂಬಿಕೆಯನ್ನು ಕಲಿಸಲು ಸಾಧ್ಯವೇ?

## ಕಲಿಕಾ ಅನುಭವ

ಈ ಕೆಳಗಿನ ಕಥನವು ನನ್ನೊಂದಿಗಿನ ಮಕ್ಕಳಿಗೆ ಯಾವ ರೀತಿ ಕಲಿಕೆಗೆ ಕಾರಣವಾಯಿತೋ, ಅದೇ ರೀತಿಯ ಅನುಭವವನ್ನು ನನಗೂ ನೀಡಿತು. ನನ್ನ ಶಾಲಾ ಭೇಟಿಗಳ ಅಂಗವಾಗಿ, ಮಕ್ಕಳು ಗ್ರಂಥಾಲಯಕ್ಕೆ ಭೇಟಿ ನೀಡಲು ನಾನು ಅವರನ್ನು ಉತ್ತೇಜಿಸುತ್ತೇನೆ. ಅಲ್ಲದೆ ಅವರಾಗಿಯೇ ಪುಸ್ತಕಗಳನ್ನು ಆರಿಸಿಕೊಳ್ಳಲು ಮತ್ತು ವಿತರಿಸಿದ ಪುಸ್ತಕಗಳನ್ನು ಗ್ರಂಥಾಲಯದ ರಿಜಿಸ್ಟರ್‌ನಲ್ಲಿ ನಮೂದಿಸಲು ಸಹಾಯ ಮಾಡುತ್ತೇನೆ. ಚಿತ್ರಗಳು ಮತ್ತು ಬಣ್ಣಗಳಿರುವ ವಿವಿಧ ಶ್ರೇಣಿಯ ಪುಸ್ತಕಗಳು ದೊರೆಯುವ ಕಾರಣ, ಮಕ್ಕಳು ಪುಸ್ತಕಗಳನ್ನು ಸಂಪೂರ್ಣ ಓದಲಾಗದೇ ಇದ್ದರೂ, ಪ್ರತಿ ವಾರವೂ ಕನಿಷ್ಠ ಒಂದು ಪುಸ್ತಕವನ್ನು ಪಡೆಯಲು ಆಸಕ್ತಿ ತೋರುತ್ತಾರೆ. ನನ್ನ ಪ್ರಯತ್ನವು, ಅವರು ಪುಸ್ತಕವನ್ನು ಮನೆಗೆ ಕೊಂಡೊಯ್ಯಲು ಮತ್ತು ಈ ಮೂಲಕ ಅದ್ಭುತ ಪ್ರಪಂಚವೊಂದನ್ನು ಅನುಭವಿಸಲು ಅವರನ್ನು ಉತ್ತೇಜಿಸುವುದಾಗಿತ್ತು. ಆರಂಭದಲ್ಲಿ, ಅವರಿಂದ ಪುಸ್ತಕವನ್ನು ಮರಳಿ ಪಡೆಯುವುದು ಸವಾಲಿನ ಕೆಲಸವಾಗಿತ್ತು. ಆದರೆ ಕಾಲ ಕಳೆದಂತೆ, ತಾವು ಈಗಲೇ ಹೊಂದಿರುವ ಪುಸ್ತಕವನ್ನು ಮರಳಿಸಿದರೆ ಇನ್ನೊಂದು ಪುಸ್ತಕವನ್ನು ಪಡೆಯಬಹುದು ಎನ್ನುವ ಮಾತು ಪ್ರಯೋಜನಕಾರಿ ಎನಿಸಿತು.

ಈ ಹಿಂದಿನ ಎರಡು ಸಾಪ್ತಾಹಿಕ ಭೇಟಿಗಳ ಸಂದರ್ಭದಲ್ಲಿ ನಾಲ್ಕನೇ ತರಗತಿಯ ಶ್ರೀಕಾಂತ್‌ಗೆ ಪುಸ್ತಕವನ್ನು ವಿತರಿಸಲು ನಾನು ನಿರಾಕರಿಸಿದೆ. ಶಾಲೆಯ ಇತರ ಅನೇಕ ವಿದ್ಯಾರ್ಥಿಗಳಂತೆ ಶ್ರೀಕಾಂತ್‌ಗೆ ತನ್ನ ಬಗ್ಗೆಯಾಗಲೀ ಅಥವಾ ಸುತ್ತಮುತ್ತಲಿನ ಪರಿಸರಗಳ ಬಗ್ಗೆಯಾಗಲೀ ಹೆಚ್ಚು ಜಾಗೃತಿ ಇರಲಿಲ್ಲ. ಅಲ್ಲದೆ ತನ್ನಲ್ಲಿರುವ ವಸ್ತುಗಳ ಬಗ್ಗೆ ಕಾಳಜಿಯೂ ಇರಲಿಲ್ಲ. ಆತನ ಮಾತೃಭಾಷೆಯು ಶಾಲೆಯ ಬೋಧನಾ ಮಾಧ್ಯಮಕ್ಕಿಂತ ಭಿನ್ನವಾಗಿದ್ದ ಕಾರಣ ಆತನಿಗೆ ಕಲಿಕೆಯಲ್ಲಿ ಸಮಸ್ಯೆಗಳಿದ್ದವು. ಆತನಿಗೆ ಕೆಲವೇ ಸ್ನೇಹಿತರಿದ್ದರು ಹಾಗೂ ಶಿಕ್ಷಕರೂ ಆತನ ಕುರಿತು ಒಳ್ಳೆಯ ಅಭಿಪ್ರಾಯವನ್ನು ಹೊಂದಿರಲಿಲ್ಲ. ಆತ ಒಬ್ಬ ದುರ್ಬಲ ಕಲಿಕೆಯ ವಿದ್ಯಾರ್ಥಿ ಎಂದು ಆತನನ್ನು ಪರಿಗಣಿಸಿದ್ದರು.

ಮೂರನೇ ಬಾರಿಗೆ ಆತ ನನ್ನ ಬಳಿ ಬಂದ. ಆದರೆ ಆತನ ದೀರ್ಘ ವಿನಂತಿಗೆ ನಾನು ಈ ಬಾರಿಯೂ ಗಮನ ನೀಡಲಿಲ್ಲ. ಆತ ಈ ಹಿಂದೆ ಪಡೆದಿದ್ದ ಪುಸ್ತಕವನ್ನು ವಾಪಸ್‌ನೀಡಿದ ಕಾರಣ ಆತನಿಗೆ ನಾನು ಪುಸ್ತಕವನ್ನು ನೀಡಲಿಲ್ಲ.

ಶ್ರೀಕಾಂತ್ ಹಠ ಸ್ವಭಾವದ ಹುಡುಗ. ಸುಮಾರು ಇಪ್ಪತ್ತು ನಿಮಿಷಗಳ ಕಾಲ, ತಾನು ಈ ಹಿಂದೆ ಪಡೆದಿದ್ದ 'ಎವರಿಥಿಂಗ್ ಬಿಗ್ ಕ್ಯಾಟ್ಸ್' ಎಂಬ ಪುಸ್ತಕವನ್ನು ಮರಳಿಸಿದ್ದ ಎಂಬುದಾಗಿ ನನ್ನ ಮನವೊಲಿಸಲು ಯತ್ನಿಸಿದ.

ಆತನಿಗೆ ಈ ಬಾರಿ ನಿಜವಾಗಿಯೂ ಪುಸ್ತಕವನ್ನು ಪಡೆಯುವ ಮನಸ್ಸು ಇದ್ದಂತೆ ಕಾಣಿಸಿತು. ಹೀಗಾಗಿ ಆತನ ಮಾತನ್ನು ನಂಬುವಂತೆ ಆತ ಮತ್ತೆ ಮತ್ತೆ ನನ್ನ ಬಳಿ ವಿನಂತಿಸಿದ. ಈ ಹಿಂದೆಯೂ ಆತ ನನ್ನ ಬಳಿ ಪ್ರಾಮಾಣಿಕವಾಗಿ ವರ್ತಿಸದೆ ಇದ್ದುದು ನನಗೆ ನೆನಪಿದೆ. ಹೀಗಾಗಿ ನಾನು ಪಟ್ಟು ಬಿಡಲಿಲ್ಲ. ರಿಜಿಸ್ಟರ್‌ನಲ್ಲಿ ನೋಂದಾಯಿಸುವುದು ಅಗತ್ಯ ಹಾಗೂ ಆತನು ಪಡೆದಿದ್ದ ಪುಸ್ತಕವನ್ನು ವಾಪಸ್ ಮಾಡಿದ್ದಾನೆ. ಎನ್ನುವುದಕ್ಕೆ ಯಾವುದೇ ದೃಢೀಕರಣವಿಲ್ಲ ಎಂಬುದನ್ನು ನಾನು ಆತನಿಗೆ ಸ್ಪಷ್ಟವಾಗಿ ಹೇಳಿದೆ.

ಹೊಣೆಗಾರಿಕೆಯನ್ನು ಖಚಿತಪಡಿಸಿಕೊಳ್ಳುವ ಕುರಿತು ಮಕ್ಕಳೊಂದಿಗೆ ಮತ್ತೆಮತ್ತೆ ಸಂವಾದಗಳನ್ನು ನಡೆಸಲಾಯಿತು. ಹೀಗಾಗಿ, ಇಪ್ಪತ್ತು ನಿಮಿಷಗಳ ಕಾಲ ನಿರಂತರ ವಿನಂತಿ ಮತ್ತು ನನ್ನ ಶಾಂತ ಪ್ರತಿಕ್ರಿಯೆಯ ನಂತರ, ತನ್ನ ಜೊತೆ ತರಗತಿಗೆ ಮರಳಲು ಶ್ರೀಕಾಂತ್ ತನ್ನ ಗೆಳೆಯನನ್ನು ತಳ್ಳಿದ.

ಈವರೆಗಿನ ಯಾವುದೇ ಮಾತುಕತೆಯ ವೇಳೆ ಆತ ಇಷ್ಟು ಹಠ ಮಾಡಿರಲಿಲ್ಲ. ನಾನು ನಿಜವಾಗಿಯೂ ತಪ್ಪು ಮಾಡಿದ್ದೇನೆಯೇ? ಒಂದು ವೇಳೆ ಆತ ನಿಜಕ್ಕೂ ಪುಸ್ತಕವನ್ನು ಮರಳಿಸಿದ್ದರೆ? ಎಂದು ನಾನು ಯೋಚಿಸಲು ಶುರು ಮಾಡಿದೆ. ನಾನು ರಿಜಿಸ್ಟರ್ ಅನ್ನು ಮರುಪರಿಶೀಲಿಸಲು ನಿರ್ಧರಿಸಿದೆ. ನಾನು ಈಗ ಒಂದು ನೋಂದಣಿಯನ್ನು ಗಮನಿಸಿದೆ. ಆದರೆ ಮರಳಿಸಿದ ದಿನಾಂಕ ಮಾತ್ರ ಸ್ಪಷ್ಟವಾಗಿರಲಿಲ್ಲ. ಆತನಿಗೆ ಸಂದೇಹದ ಲಾಭವನ್ನು (benefit of doubt) ನೀಡಲು ನಿರ್ಧರಿಸಿ, ಆತನು ಕೇಳಿದ್ದ ಪುಸ್ತಕವನ್ನು ತೆಗೆದುಕೊಂಡು ಆತನ ತರಗತಿಗೆ ಹೋಗಿ, 'ಶ್ರೀಕಾಂತ್ ಲಗೂ ನಿನ್ನ ಪುಸ್ತಕ' ಎಂದು ಹೇಳಿದೆ.

ಆತನ ಮೊಗದಲ್ಲಿ ಅರಳಿದ ನಗುವು ನಿಜಕ್ಕೂ ಸಂತಸವನ್ನು ವ್ಯಕ್ತಪಡಿಸುತ್ತಿತ್ತು. ಈ ಕ್ಷಣವನ್ನು ನಾನು ಮರೆಯಲು ಸಾಧ್ಯವಿಲ್ಲ. ಅಲ್ಲಿ ಅಪನಂಬಿಕೆಯೂ ಇತ್ತು. 'ನೀವು ನಿಜಕ್ಕೂ ನನಗಾಗಿಯೇ ಇಲ್ಲಿಯ ತನಕ ಬಂದೀರಾ? ನಾನು ಪುಸ್ತಕವನ್ನು ಮರಳಿಸಿದ್ದೇನೆ ಎಂಬುದನ್ನು ಇಡೀ ತರಗತಿಯ ಮುಂದೆ ನೀವು ನಿಜಕ್ಕೂ ಒಪ್ಪಿಕೊಳ್ಳುತ್ತಾ ಇದ್ದೀರಾ?' ಎಂಬ ಪ್ರಶ್ನೆಗಳಂದ ತಿವಿದಂತೆ ನನಗೆ ಭಾಸವಾಯಿತು. ಆ ಪುಸ್ತಕವು ಖಂಡಿತವಾಗಿಯೂ ಗ್ರಂಥಾಲಯದ ಯಾವುದಾದರೂ ಮೂಲೆಯಲ್ಲಿದೆ ಎಂಬುದು ನನಗೆ ಸಂಪೂರ್ಣವಾಗಿ ಖಚಿತವಾಯಿತು. ಈ ಹಿಂದೆಯೇ ಸಂದೇಹದ ಲಾಭವನ್ನು ಆತನಿಗೆ ನೀಡದೆ ಇದ್ದುದಕ್ಕೆ ನನಗೆ ಬೇಸರವಾಯಿತು.

ಆ ದಿನವು ಎಂದಿನಂತೆ ಸಾಗಿತು. ದಿನದ ಗಂಟೆ ಬಾರಿಸಿದಾಗ ನಾಲ್ಕನೇ ತರಗತಿಯ ಇನ್ನೊಬ್ಬ ಹುಡುಗ ಕಾರಿಡಾರ್‌ನಲ್ಲಿ ನನ್ನ ಬಳಿಗೆ ಬಂದ. ತಾನು ಪುಸ್ತಕವನ್ನು ಮರಳಿಸಲು ಇಚ್ಛಿಸುವುದಾಗಿ ಹೇಳಿದ ಆತ ಆ ಪುಸ್ತಕವನ್ನು ನನಗೆ ನೀಡಿದ. ಆತನಿಗೆ ಧನ್ಯವಾದಗಳನ್ನು ಹೇಳಿದ ನಾನು ಗ್ರಂಥಾಲಯಕ್ಕೆ ಮರಳಿದೆ ಹಾಗೂ ದಿನದ ಕೊನೆಯ ಪುಸ್ತಕದ ನಮೂದನ್ನು ಮಾಡಲು ಕುಳಿತುಕೊಂಡೆ. ಅದು 'ಎವರಿಥಿಂಗ್ ಬಿಗ್ ಕ್ಯಾಟ್ಸ್' ಪುಸ್ತಕವಾಗಿತ್ತು! ಒಮ್ಮೆಲೇ ಬೇರೆಬೇರೆ ವಿಚಾರಗಳು ನನ್ನ ಮನಸ್ಸಿನಲ್ಲಿ ಹೊರಳಾಡಿದವು. ನಿಜವಾಗಿಯೂ ಶ್ರೀಕಾಂತ್ ಪುಸ್ತಕವನ್ನು ಮರಳಿಸಿದ್ದನೇ? ಇನ್ನೊಬ್ಬ ಹುಡುಗ ಇದನ್ನು ಪಡೆದಿದ್ದನೇ? ಬೇರೆ ಯಾರಿಗೂ ಈ ಪುಸ್ತಕವನ್ನು ನೀಡಿದ್ದ ಬಗ್ಗೆ ರಿಜಿಸ್ಟರ್‌ನಲ್ಲಿ ಯಾವುದೇ ದಾಖಲೆ ಇರಲಿಲ್ಲ. ನನ್ನ ಕಡೆಯಿಂದ ಏನಾದರೂ ತಪ್ಪು ಸಂಭವಿಸಿತ್ತೇ? ಶ್ರೀಕಾಂತ್ ಕುರಿತು ನಾನು ಹೊಂದಿದ್ದ ಪೂರ್ವಕಲ್ಪಿತ ಗ್ರಹಿಕೆಯ ಕಾರಣ ಆತನ ಬಗ್ಗೆ ಅಪನಂಬಿಕೆಯನ್ನು ವ್ಯಕ್ತಪಡಿಸಿದೆನೇ ಎನ್ನುವ ಭಾವ ನನ್ನನ್ನು ಕಾಡಿತು. ನನ್ನ ತಲೆಯಲ್ಲಿ ಸುಳಿದ ಪ್ರಶ್ನೆಗಳಿಗೆ ಉತ್ತರ ಸಿಗಲಿಲ್ಲ. ಈ ಮಾರ್ಗ ಸುದೀರ್ಘವಾದುದು. ಅನೇಕ ಸಂವಾದಗಳು ಮತ್ತು ಘಟನೆಗಳು ಪರಸ್ಪರ ನಂಬಿಕೆ ಮತ್ತು ಜವಾಬ್ದಾರಿಯ ಪ್ರಜ್ಞೆಯನ್ನು ರೂಪಿಸಬಹುದು.

## ಈ ಘಟನೆಯಿಂದ ಕಲಿಯಬೇಕಾದ ಪಾಠಗಳು

ಹೆಚ್ಚಿನ ಶಿಕ್ಷಕರು ಪ್ರಾಥಮಿಕವಾಗಿ ಅರಿವಿನ ಕಲಿಕೆ ಮತ್ತು ಮಕ್ಕಳ ಬೆಳವಣಿಗೆಯ ಮೇಲೆ ಗಮನ ಹರಿಸುತ್ತಾರೆ. ಅವರ ಸಾಮಾಜಿಕ – ಭಾವನಾತ್ಮಕ ಬೆಳವಣಿಗೆಯ ಕುರಿತು ಅವರು ಪ್ರಜ್ಞಾಪೂರ್ವಕವಾಗಿ ಏನನ್ನೂ ಮಾಡುವುದಿಲ್ಲ. ಸಮಗ್ರ ಬೆಳವಣಿಗೆ ಉಂಟಾಗಬೇಕಾದರೆ ಸಾಮಾಜಿಕ – ಭಾವನಾತ್ಮಕ ಕೌಶಲ್ಯಗಳ ಕಲಿಕೆಯು ಅರಿವಿನ ಕೌಶಲ್ಯಗಳ ಬೆಳವಣಿಗೆಯ ಜೊತೆಯಲ್ಲೇ ಸಾಗಬೇಕು. ಬದಲಾವಣೆ ಉಂಟಾಗಬೇಕಾದರೆ ಪ್ರತಿದಿನವೂ ಸಣ್ಣ ಮಟ್ಟಿನ ಪ್ರಜ್ಞಾಪೂರ್ವಕ ಪ್ರಯತ್ನಗಳು ನಡೆಯಬೇಕು.

ಶಾಲೆಯ ಪ್ರತಿ ದಿನದ ಅನುಭವಗಳು ಮತ್ತು ಘಟನೆಗಳು, ಈ ಕ್ಷೇತ್ರಗಳಲ್ಲಿ ಬೆಳವಣಿಗೆ ಸಾಧಿಸುವುದಕ್ಕಾಗಿ ನಾವು ನಡೆಸಬೇಕಾದ ನಿರಂತರ ಸಂವಾದಕ್ಕೆ ಉತ್ತಮ ಚೌಕಟ್ಟನ್ನು ಒದಗಿಸುತ್ತವೆ. ಅರಿವಿನ ಮತ್ತು ಸಾಮಾಜಿಕ – ಭಾವನಾತ್ಮಕ ಕ್ಷೇತ್ರಗಳು ಪರಸ್ಪರ ಅವಲಂಬಿತವಾಗಿವೆ. ಕೆಲವೊಮ್ಮೆ, ನಿರಂತರವಾಗಿ ಮಾಡುವ ಸಣ್ಣಪುಟ್ಟ ಕೆಲಸಗಳು ಅಥವಾ ಸಕಾಲದಲ್ಲಿ ಗುರುತಿಸುವ ಸಣ್ಣಪುಟ್ಟ ಕೆಲಸಗಳು ಮಗುವಿನ ಸಾಮಾಜಿಕ – ಭಾವನಾತ್ಮಕ ಅಭಿವೃದ್ಧಿಗೆ ದೊಡ್ಡ ಮಟ್ಟದಲ್ಲಿ ಕೊಡುಗೆ ನೀಡುತ್ತವೆ.

## ನಾನು ಪಡೆದ ಒಳನೋಟ

ಮಕ್ಕಳೊಂದಿಗೆ ಕೆಲಸ ಮಾಡುವಾಗ, ಕೆಲವು ಸಲಹೆಗಳನ್ನು ಅನುಸರಿಸಲು ನಾನು ಯತ್ನಿಸಿದೆ. ಶಿಕ್ಷಕರು ಮತ್ತು ಮಕ್ಕಳ ನಡುವೆ ಇನ್ನೂ ಹೆಚ್ಚಿನ ನಂಬಿಕೆಯ ಸಂಬಂಧವನ್ನು ಇದು ರೂಪಿಸುತ್ತದೆ ಎಂದು ನಾನು ನಂಬಿದ್ದೇನೆ.

- ಮೊತ್ತಮೊದಲಿಗೆ ಹಾಗೂ ಮುಖ್ಯವಾಗಿ ಪ್ರತಿ ಮಗುವನ್ನು ಗೌರವ ಮತ್ತು ಕಾಳಜಿಯಿಂದ ನೋಡಿಕೊಳ್ಳುವುದು ಅಗತ್ಯ ಪ್ರತಿ ಮಗುವಿಗೆ ತರಗತಿಯಲ್ಲಿ ಕೆಲಸಗಳನ್ನು ನಿಭಾಯಿಸಲು ಅವಕಾಶ ನೀಡಿ. ಇಲ್ಲದಿದ್ದರೆ, ಜವಾಬ್ದಾರಿಯುತ ಮಕ್ಕಳು ಎಂದಿಗೂ ಶಾಲೆಯ ಹೆಚ್ಚಿನ ಕೆಲಸಗಳನ್ನು ನಿಭಾಯಿಸಬೇಕಾಗುತ್ತದೆ
- ಪರಿಣಾಮಗಳು ಮತ್ತು ಪುರಸ್ಕಾರಗಳನ್ನು ಸೌಮ್ಯವಾಗಿ ಪರಿಚಯಿಸಿ. ಅದು ಒಂದೇ ಪ್ರಕಾರದಲ್ಲಿ ಇರಬೇಕಾದ ಅಗತ್ಯವಿಲ್ಲ. ಏಕೆಂದರೆ, ಒಂದು ಮಗುವಿಗೆ ಪುರಸ್ಕಾರವನ್ನು ನೀಡಿದಾಗ ಅದು ಧನಾತ್ಮಕ ಪರಿಣಾಮವನ್ನುಂಟು ಮಾಡಬಹುದು.
- ತಪ್ಪು ಮಾಡಲು ಅವಕಾಶ ನೀಡಿ

- ಮಗುವಿನ ಅಭಿಪ್ರಾಯವನ್ನು ಕೇಳಿ. ಅಲ್ಲದೆ ಪ್ರಯತ್ನದ ಮೇಲೆ ಗಮನ ನೀಡಬೇಕೇ ಹೊರತು ಫಲಿತಾಂಶದ ಮೇಲಲ್ಲ. ಅಂದರೆ ಮಗುವು ಯಶಸ್ವಿಯಾಗುತ್ತದೆಯೇ ಅಥವಾ ಇಲ್ಲವೇ ಎನ್ನುವುದು ಪ್ರಸ್ತುತವಲ್ಲ
- ಧನಾತ್ಮಕ ಮನೋಭಾವಗಳ ಕ್ರಿಯೆಗಳ ಬಲವರ್ಧನೆ ಮಾಡಿ
- ಒಂದು ಮಗುವು ನಿರ್ದಿಷ್ಟ ರೀತಿಯಲ್ಲಿ ಯಾಕೆ ವರ್ತಿಸುತ್ತಿದೆ ಎಂಬುದರ ಕುರಿತು ನಿರಂತರ ಸಂವಾದ ನಡೆಸಿ
- ಮಗು ಮತ್ತು ಶಿಕ್ಷಕರಿಗೆ ಪರ್ಯಾಲೋಚನೆಗಾಗಿ ಸಮಯ ನೀಡಿ
- ಮಗುವಿನ ವರ್ತನೆಯನ್ನು ತಿದ್ದಬೇಕಾದರೆ ಶಿಕ್ಷಕರು ನಿರಂತರವಾಗಿ ಪ್ರಯತ್ನವನ್ನು ಮುಂದುವರಿಸಬೇಕು
- ಭೀತಿರಹಿತ ವಾತಾವರಣವನ್ನು ಕಲ್ಪಿಸಿ

ಬದಲಾಗಬೇಕಾದರೆ ಸಮಯ ಮತ್ತು ತಾಳ್ಮೆ ಬೇಕು ನಮ್ಮ ಪ್ರಯತ್ನಗಳ ಪರಿಣಾಮವು ನಮ್ಮ ಕೆಲಸದ ಬದುಕಿನ ಅವಧಿಯಲ್ಲಿ ಕಾಣಿಸದೆ ಇರಬಹುದು. ಆದರೆ ಕಾಲ ಕಳೆದಂತೆ ಒಂದಂತು ನಿಜವಾಗಿದೆ. ಧನಾತ್ಮಕ ಪ್ರಯತ್ನದ ಪರಿಣಾಮವು ಕಾಲ ಕಳೆದಂತೆ ಖಂಡಿತವಾಗಿಯೂ ಲಭಿಸುತ್ತದೆ; ಅದೂ ನಿರೀಕ್ಷಿಸದೆ ಇದ್ದ ಸಮಯದಲ್ಲಿ!

ನಮ್ಮ ಪಠ್ಯಕ್ರಮದ ವ್ಯಾಪ್ತಿ, ಪ್ರತಿ ತರಗತಿಯಲ್ಲಿರುವ ಮಕ್ಕಳ ಸಂಖ್ಯೆ, ಇವುಗಳಿಂದಾಗಿ ಪ್ರತಿ ಮಗುವಿನ ಬೆಳವಣಿಗೆಯ ಎಲ್ಲಾ ಕ್ಷೇತ್ರಗಳ ಮೇಲೆ ಶಿಕ್ಷಕರು ಗಮನ ಹರಿಸುವುದು ಕಷ್ಟಸಾಧ್ಯವಾಗುತ್ತದೆ. ಒಬ್ಬ ಶಿಕ್ಷಕರಾಗಿ ನಾವು ಅರಿತುಕೊಳ್ಳ–ಬೇಕಾದುದೇನೆಂದರೆ, ಶಿಕ್ಷಕರು ಮತ್ತು ಮಕ್ಕಳ ನಡುವಿನ ಪ್ರೀತಿ, ನಂಬಿಕೆ ಮತ್ತು ಹೊಣೆಗಾರಿಕೆಯು ದ್ವಿಪಥದ ಪ್ರಕ್ರಿಯೆಯಾಗಿದ್ದು, ಶಾಲೆಯ ಯೋಗಕ್ಷೇಮವೆಂದರೆ ಶಿಕ್ಷಕರು ಮತ್ತು ವಿದ್ಯಾರ್ಥಿಗಳ ಒಟ್ಟು ಯೋಗಕ್ಷೇಮವಾಗಿದೆ.

ಯೋಗಕ್ಷೇಮದ ವಾತಾವರಣವನ್ನು ಸೃಷ್ಟಿಸುವುದು ಎಂದರೆ ನಾವಾಗಿಯೇ ಮೌಲ್ಯಗಳನ್ನು ಮತ್ತೊಮ್ಮೆ ಕಲಿಯುವುದು ಎಂದರ್ಥ. ಮಕ್ಕಳು ಸ್ವಯಂಪ್ರಜ್ಞೆ ಮತ್ತು ಆರೈಕೆಯನ್ನು ಅಳವಡಿಸಿ ಒಳರೂಪ ಕೊಡುವಂತೆ ನಾವು ಮಾಡಿದಾಗ ಅದು ಒಟ್ಟಾರೆ ಧನಾತ್ಮಕ ವರ್ತನೆಗೆ ಕಾರಣವಾಗುತ್ತದೆ. ಮೆಲ್ಲನೆ ಹಾಗೂ ಸಮಗ್ರ ವಿಧಾನದಲ್ಲಿ ಇದನ್ನು ಮಾಡಿದರೆ, ಒಟ್ಟಾರೆಯಾಗಿ ಶಾಲಾ ಸಂಸ್ಕೃತಿಯಲ್ಲಿ ಧನಾತ್ಮಕ ಬದಲಾವಣೆಯನ್ನು ತರಬಲ್ಲ ನಂಬಿಕೆಯ ಸಂಬಂಧವನ್ನು ಮಕ್ಕಳು ಅರಿತುಕೊಳ್ಳಲು ಹಾಗೂ ನಿರ್ವಹಿಸಲು ಸಹಾಯವಾಗುತ್ತದೆ.

*ಮಕ್ಕಳ ಗುರುತನ್ನು ಮರೆಮಾಚುವ ಉದ್ದೇಶದಿಂದ ಹೆಸರುಗಳನ್ನು ಬದಲಾಯಿಸಲಾಗಿದೆ




**ವಿನೀತಾ ರೋಚಾ** ಅವರು ಅಜೀಂ ಪ್ರೇಮ್‌ಜಿ ಫೌಂಡೇಷನ್‌ನ ಸಂಪನ್ಮೂಲ ವ್ಯಕ್ತಿಯಾಗಿದ್ದಾರೆ ಹಾಗೂ ಬೆಂಗಳೂರು ನಗರದ ಸರ್ಕಾರಿ ಶಾಲೆಗಳಲ್ಲಿ ಕೆಲಸ ಮಾಡುತ್ತಿದ್ದಾರೆ. ಅವರು ಕಳೆದ ಒಂದು ದಶಕದಿಂದ ಶಿಕ್ಷಣ ಕ್ಷೇತ್ರದ ವೃತ್ತಿಪರರಾಗಿದ್ದು, ಮಕ್ಕಳು ಬೆಳೆಯಲು ಸಹಾಯ ಮಾಡುವುದರಲ್ಲಿ ನಂಬಿಕೆ ಇಟ್ಟಿದ್ದಾರೆ. ಅವರನ್ನು vinita.rocha@azimpremjifoundation.org ಮೂಲಕ ಸಂಪರ್ಕಿಸಬಹುದು.

ಅನುವಾದ: **ಮೆಲ್ವಿನ್ ಮೆಂಡೋನ್ಸಾ** | ಪರಿಶೀಲನೆ: **ಟಿ.ಎನ್.ವಾಸುದೇವಮೂರ್ತಿ**